# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಮಾನ್ಯ ಸದಸ್ಯರ ಹೆಸರು | ಡಾ: ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2082 |
| ಉತ್ತರಿಸುವ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ವಸತಿ ಸಚಿವರು |

| ಅನು ಕ್ರಮ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರದ ಹೆಬ್ಬಾಳ ವಿಧಾನ ಸಭಾ ಕ್ಷೇತ್ರಕ್ಕೆ 2018 ರಿಂದ ಈಚೆಗೆ ಮಂಜೂರು ಮಾಡಿರುವ ಮನೆಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಬೆಂಗಳೂರು ನಗರದ ಹೆಬ್ಬಾಳ ವಿಧಾನ ಸಭಾ ಕ್ಷೇತ್ರಕ್ಕೆ 2018-19ನೇ ಸಾಲಿನಲ್ಲಿ "ಪ್ರಧಾನ ಮಂತ್ರಿ ಆವಾಸ್ ಯೋಜನೆ - ಸರ್ವರಿಗೂ ಸೂರು ಯೋಜನೆ" ಯಡಿ ಅಫೋರ್ಡೆಬಲ್ ಹೌಸಿಂಗ್ ಇನ್ ಪಾರ್ಟನರ್ಶಿಪ್ (A.H.P.) ಘಟಕದಡಿ ರೂ. 27.97 ಕೋಟಿಗಳ ಅಂದಾಜು ವೆಚ್ಚದಲ್ಲಿ 412 ಮನೆಗಳನ್ನು ನಿರ್ಮಿಸಲು ಕೇಂದ್ರ ಸರ್ಕಾರದಿಂದ ಮಂಜೂರಾತಿ ನೀಡಲಾಗಿದೆ. ಸದರಿ ಯೋಜನೆಯನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ.<br><br>ಬೆಂಗಳೂರು ನಗರದ ಹೆಬ್ಬಾಳ ವಿಧಾನ ಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ 2018-19ನೇ ಸಾಲಿನಲ್ಲಿ ಸದರಿ ಯೋಜನೆಯಡಿ "ಫಲಾನುಭವಿಗಳಿಂದ ಸ್ವಯಂ ಮನೆ ನಿರ್ಮಾಣ (B.L.C.)" ಘಟಕದಡಿ 4 ಮನೆಗಳನ್ನು ರೂ. 14.00 ಲಕ್ಷಗಳ ಯೋಜನಾ ವೆಚ್ಚದಲ್ಲಿ (ಮೊತ್ತದಲ್ಲಿ) ಕೈಗೊಳ್ಳಲು ಅನುಮೋದನೆ ನೀಡಲಾಗಿದೆ.<br><br>2019-20 ಹಾಗೂ 2020-21ನೇ ಸಾಲಿನಲ್ಲಿ ಯಾವುದೇ ಮನೆಗಳು ಮಂಜೂರಾಗಿರುವುದಿಲ್ಲ. |
| ಆ | ಈ ಮನೆಗಳ ನಿರ್ಮಾಣಕ್ಕೆ ಸರ್ಕಾರ ಬಿಡುಗಡೆ ಮಾಡಲಾಗಿರುವ ಮೊತ್ತ ಎಷ್ಟು; | ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ಅನುಷ್ಠಾನಗೊಳಿಸಲು ಮಂಜೂರಾದಂತೆ 412 ಮನೆಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಈ ಬಗ್ಗೆ ಕಾರ್ಯಾದೇಶ (Work Order) ನೀಡಿದ ನಂತರ ಸರ್ಕಾರದಿಂದ ಅನುದಾನ ಬಿಡುಗಡೆ ಮಾಡಲಾಗುವುದು.<br><br>ಕೇಂದ್ರ ಸರ್ಕಾರವು ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿನ ಬಿ.ಎಲ್.ಸಿ. ಘಟಕದಡಿ ಮನೆ ನಿರ್ಮಿಸಿಕೊಳ್ಳಲು ಪ್ರತಿ ಮನೆಗೆ ರೂ. 1.50 ಲಕ್ಷ ಸಹಾಯಧನ ನೀಡುತ್ತದೆ. ಕೇಂದ್ರ ಸರ್ಕಾರದಿಂದ ದಿನಾಂಕ 27.03.2019 ರಂದು ಮೊದಲನೇ ಕಂತಿನ ಅನುದಾನ ಬಿಡುಗಡೆಯಾಗಿದ್ದು, ಫಲಾನುಭವಿಗಳ ಮನೆ ನಿರ್ಮಾಣ ಕಾರ್ಯದಲ್ಲಿ ಪ್ರಗತಿಯಾಗದ ಕಾರಣ ಯಾವುದೇ ಅನುದಾನ ಬಿಡುಗಡೆ ಮಾಡಿರುವುದಿಲ್ಲ. ಸದರಿ ಮನೆಗಳ ನಿರ್ಮಾಣ ಕಾರ್ಯದ ಪ್ರಗತಿಯನ್ನು ಜಿ.ಪಿ.ಎಸ್. ಆಧರಿಸಿ ಮುಂದಿನ ದಿನಗಳಲ್ಲಿ ನಿಯಮಾನುಸಾರ ಅನುದಾನ ಬಿಡುಗಡೆ ಮಾಡಲಾಗುವುದು. |

<table>
<tr><th>ಅನು ಕ್ರಮ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಇ</td><td>ಯಾವ ಯಾವ ಯೋಜನೆಗಳ ಅಡಿಯಲ್ಲಿ ಈ ಯೋಜನೆಗಳನ್ನು ನಿರ್ಮಿಸಲಾಗುತ್ತಿದೆ? (ವಿವರಗಳನ್ನು ವಾರ್ಡ್‌ವಾರು ನೀಡುವುದು)</td><td>
ಹೆಬ್ಬಾಳ ವಿಧಾನ ಸಭಾ ಕ್ಷೇತ್ರದಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಯಡಿಯಲ್ಲಿ ಅನುಮೋದನೆಗೊಂಡ ಮನೆಗಳ ವಾರ್ಡ್ ವಾರು ವಿವರಗಳು ಕೆಳಕಂಡಂತಿವೆ:-<br><br>
(1) "ಫಲಾನುಭವಿಗಳಿಂದ ಸ್ವಯಂ ಮನೆ ನಿರ್ಮಾಣ (B.L.C.)" ಘಟಕದಡಿ ಮಂಜೂರಾಗಿರುವ ಮನೆಗಳ ವಿವರ:-
<table>
<tr><th>ಕ್ರ. ಸಂ.</th><th>ಬಿ.ಬಿ.ಎಂ.ಪಿ. ವಾರ್ಡ್ ಸಂಖ್ಯೆ</th><th>ಡಿ.ಪಿ.ಆರ್.</th><th>ಅನುಮೋದನೆಗೊಂಡಿರುವ ಮನೆಗಳು</th><th>ಅನುಮೋದನೆಗೊಂಡ ದಿನಾಂಕ</th></tr>
<tr><td>1</td><td>19</td><td rowspan="3">133 DUs</td><td>2</td><td rowspan="3">28.11.2018 (40th CSMC)</td></tr>
<tr><td>2</td><td>22</td><td>1</td></tr>
<tr><td>3</td><td>46</td><td>1</td></tr>
</table>
(2) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ವತಿಯಿಂದ ನಿರ್ಮಿಸುವ 412 ಮನೆಗಳ ವಾರ್ಡ್ ವಾರು ವಿವರಗಳು ಕೆಳಕಂಡಂತಿವೆ:-
<table>
<tr><th>ಕ್ರಮ ಸಂಖ್ಯೆ</th><th>ಕೊಳಚೆ ಪ್ರದೇಶದ ಹೆಸರು</th><th>ಬಿ.ಬಿ.ಎಂ.ಪಿ. ವಾರ್ಡ್ ಸಂಖ್ಯೆ</th><th>ಮಂಜೂರಾದ ಮನೆಗಳು</th></tr>
<tr><td>1</td><td>ಪಾಪಣ್ಣ ಗಾರ್ಡನ್</td><td>20</td><td>15</td></tr>
<tr><td>2</td><td>ಗುಡ್ಡದಹಳ್ಳಿ</td><td>20 ಹಾಗೂ 21</td><td>62</td></tr>
<tr><td>3</td><td>ಚೋಳನಾಯಕನಹಳ್ಳಿ</td><td>21 ಹಾಗೂ 22</td><td>72</td></tr>
<tr><td>4</td><td>ಕುಂತಿಗ್ರಾಮ</td><td>21</td><td>90</td></tr>
<tr><td>5</td><td>ಭುವನೇಶ್ವರಿ ನಗರ</td><td>20</td><td>51</td></tr>
<tr><td>6</td><td>ನಾಗೇನಹಳ್ಳಿ</td><td>22</td><td>23</td></tr>
<tr><td>7</td><td>ಮನೋರಾಯನ ಪಾಳ್ಯ</td><td>22 ಹಾಗೂ 23</td><td>23</td></tr>
<tr><td>8</td><td>ಕನಕ ನಗರ</td><td>22</td><td>6</td></tr>
<tr><td>9</td><td>ಅಮರ್ ಜ್ಯೋತಿ ಸ್ಲಂ</td><td>21</td><td>6</td></tr>
<tr><td>10</td><td>ನಾಗಶೆಟ್ಟಿ ಹಳ್ಳಿ</td><td>18 ಹಾಗೂ 19</td><td>11</td></tr>
<tr><td>11</td><td>ಗೆದ್ದಲಹಳ್ಳಿ</td><td>18</td><td>46</td></tr>
<tr><td>12</td><td>ಮುನೇಶ್ವರ ಬ್ಲಾಕ್</td><td>20 ಹಾಗೂ 21</td><td>7</td></tr>
<tr><td colspan="3">ಒಟ್ಟು</td><td>412</td></tr>
</table>
</td></tr>
</table>

[ಸಂಖ್ಯೆ: ವಇ 66 ಹೆಚ್‌ಎಫ್‌ಎ 2021]

(ವಿ. ಸೋಮಣ್ಣ)
ವಸತಿ ಸಚಿವರು.